ಜಾನಪದ

ಉಡುಪಿ ಜಿಲ್ಲೆ

| | | | | | |
|---|---|---|---|---|---|
| 1564. | 1. | ಶ್ರೀ ಕೆ. ಕುರುಂಬಿಲ ಪೂಜಾರಿ ಬಿನ್ ಲೇಟ್ ಅಂತಯ್ಯ ಪೂಜಾರಿ # 12–130, ಪಾಡಿಮನೆ, ಕುತ್ಪಾಡಿ, ವಿದ್ಯಾವರ, ಉಡುಪಿ ತಾಲೂಕು ಮತ್ತು ಜಿಲ್ಲೆ | ಭೂತಕೋಲಾಟ | 3,600–00 | 64 |
| 1565. | 2. | ಶ್ರೀ ಸಾದು ಪೂಜಾರಿನೀರೆ ಕೋಟೆಗುಡ್ಡೆ, ನೀರೆ, ಕಾರ್ಕಳ ತಾಲೂಕು, ಉಡುಪಿ ಜಿಲ್ಲೆ | ಜಾನಪದ | 3,600–00 | 63 |
| 1566. | 3. | ಶ್ರೀ ಕರಿಯ ಪೂಜಾರಿ ಬಿನ್ ಬೂರಪೂಜಾರಿ, ಗೋಣಕಟ್ಟ, ಕೀಳಂಜೆ, ಹಾವೆಂಜೆ ಹೋಬಳಿ, ಉಡುಪಿ ತಾಲೂಕು & ಜಿಲ್ಲೆ | ಜಾನಪದ | 3,200–00 | 61 |
| 1567. | 4. | ಶ್ರೀಮತಿ ನರಸಿಂಹ ಪೂಜಾರಿ ಬಿನ್ ಕೊರಗ ಪೂಜಾರಿ ಕಣಿಯರ ತೋಟ, ಹಾರಾಡಿ–ಸಾಲಕೇರಿ ತಾ: ಜಿ: ಉಡುಪಿ. | ಜಾನಪದ | 3,600–00 | 59 |

ನಾಟಕ

| | | | | | |
|---|---|---|---|---|---|
| 1568. | 5. | ಶ್ರೀ ಬಿ. ತಾರಾನಾಥ್ ನಾಯಕ್ ಸಾಧನ ಕುಟೀರ, ವಾರ್ಡಿನ 76, ಬಡಗುಬೆಟ್ಟು ಗ್ರಾಮ, ಕುಕ್ಕಿಕಟ್ಟೆ ಉಡುಪಿ ತಾ, ಜಿಲ್ಲೆ–576101 | ನಾಟಕ | 17,000–00 | 65 |
| 1569. | 6. | ಶ್ರೀಮತಿ ಕೆ.ಸರೋಜಾ ಸಾಲಿಯಾನ್ ತಂದೆ ದಿವಂಗತ ರಾಮಸಾಲಿಯಾನ್ ಈಸ್ಟ್ ಬ್ಲಾಕ್ ರಸ್ತೆ, ಸಿದ್ದನಾಯಕ್ ಕಾಂಪೌಂಡ್ ಕುಂದಾಪುರ, ಉಡುಪಿ ಜಿಲ್ಲೆ–576 201 | ನಾಟಕ | 15,500–00 | 63 |

ಯಕ್ಷಗಾನ

| | | | | | |
|---|---|---|---|---|---|
| 1570. | 7. | ಶ್ರೀ ಎಂ ಆರ್ ವಾಸುದೇವ ಸಾಮಗ ಬಿನ್ ಎಂ.ರಾಮದಾಸ ಸಾಮಗ ಬಾಳೆಬೆಟ್ಟು, ಮಣೂರು ಅಂಚೆ/ಗ್ರಾಮ, ಉಡುಪಿ ಜಿಲ್ಲೆ–576 221 | ಯಕ್ಷಗಾನ | 3,600–00 | 64 |
| 1571. | 8. | ಶ್ರೀ ನಾಗೇಶ ಗಾಣಿಗ, ಬಿನ್ ದಿ.ಗಣಪ ಗಾಣಿಗ ನಾಡಾ ಅಂಚೆ/ಗ್ರಾಮ, ಬೈಂದೂರು ಹೋಬಳಿ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಯಕ್ಷಗಾನ | 11,000–00 | 64 |
| 1572. | 9. | ಶ್ರೀ ಸುಬ್ಬಣ್ಣ ಗಾಣಿಗ ತಂದೆ॥ ನಾರಾಯಣ ಗಾಣಿಗ ನೂಜಾಡಿ ಗುಡ್ಡಿಮನೆ, ಉಳ್ಳೂರು ಮೂಡುಮಠ, ಬೈಂದೂರು, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ | ಯಕ್ಷಗಾನ | 11,000–00 | 64 |
| 1573. | 10. | ಶ್ರೀ ಆರ್ಗೋಡು ಮೋಹನದಾಸ ಶೆಣೈ ತಂದೆ॥ ಆರ್ಗೋಡು ಗೋವಿಂದರಾಯ ಶೆಣೈ ನಂ 16, ಕಮಲಶಿಲೆ, ವಂಡ್ಸೆ, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ. | ಯಕ್ಷಗಾನ | 12,000–00 | 62 |
| 1574. | 11. | ಹೆಮ್ಮಾಡಿ ರಾಮ ಯಾನೆ ರಾಮ ಪೂಜಾರಿ ಬಿನ್ ಮಂಜ ಪೂಜಾರಿ ಹೆಮ್ಮಾಡಿ ಅಂಚೆ/ಗ್ರಾಮ, ವಂಡ್ಸೆ ಹೋಬಳಿ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಗೊಂಬೆಯಾಟದಲ್ಲಿ ಬಯಲಾಟ | 11,500–00 | 61 |
| 1575. | 12. | ಶ್ರೀ ವಿಶ್ವೇಶ್ವರ ಸೋಮಯಾಜಿ ತಂದೆ॥ ಶಿವರಾಮ ಸೋಮಯಾಜಿ ಸಿದ್ಧಾಪುರ, ಜನಸಾಲೆ ಅಂಚೆ, ವಂಡ್ಸೆ ಹೋಬಳಿ, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ | ಯಕ್ಷಗಾನ | 11,000–00 | 61 |
| 1576. | 13. | ಶ್ರೀ ಜಯಕುಮಾರ್ ಉದ್ಯಾವರ ಬಿನ್ ದಿ. ಬಸವ ಗಾಣಿಗ ಕೇದಾರು ಮನೆ, ಉದ್ಯಾವರ ಅಂಚೆ/ಗ್ರಾಮ ಉಡುಪಿ ತಾಲ್ಲೂಕು, ಜಿಲ್ಲೆ. | ಯಕ್ಷಗಾನ ಸ್ತ್ರೀ ವೇಷ | 9,000–00 | 60 |

ನಾಟಕ

ಚಿಕ್ಕಬಳ್ಳಾಪುರ ಜಿಲ್ಲೆ

| | | | | | |
|---|---|---|---|---|---|
| 1577. | 1. | ಶ್ರೀ ಎಲ್ ರಾಮಯ್ಯ ಮಳಮಾಚನಹಳ್ಳಿ, ಜಂಗಮಕೋಟೆ ಹೋಬಳಿ, ತಾ:ಶಿಡ್ಲಘಟ್ಟ, ಜಿ: ಚಿಕ್ಕಬಳ್ಳಾಪುರ | ನಾಟಕ | 3,600–00 | 65 |

| | | | | | |
|---|---|---|---|---|---|
| 1578. | 2. | ಶ್ರೀ ಎಂ.ವಿ.ಅಶ್ವಥಪ್ಪ ತಂದೆ ವೆಂಕಟರಾಯಪ್ಪ ಮೇಲೂರು ಅಂಚೆ, ಜಂಗಮಕೋಟೆ ಹೋಬಳಿ, ತಾ:ಶಿಡ್ಲಘಟ್ಟ, ಜಿ: ಚಿಕ್ಕಬಳ್ಳಾಪುರ | ನಾಟಕ | 3,500–00 | 63 |
| 1579. | 3. | ಶ್ರೀ ಎ.ನಂಜಪ್ಪ ಲೇಟ್ ಅಂಜಿನಪ್ಪ ಇಡಗೂರು ಅಂಚೆ, ಕಸಬಾ ಹೋಬಳಿ ಗೌರಬಿದನೂರು ತಾ ಚಿಕ್ಕಬಳ್ಳಾಪುರ ಜಿಲ್ಲೆ–281351 | ನಾಟಕ | 10,000–00 | 63 |
| 1580. | 4. | ಶ್ರೀ ಎಂ.ವಿ.ಅಂಜಿನಪ್ಪ ತಂದೆ ಮುನಿವೆಂಕಟಪ್ಪ ಮೇಲೂರು ಅಂಚೆ, ಜಂಗಮಕೋಟೆ ಹೋಬಳಿ ತಾ:ಶಿಡ್ಲಘಟ್ಟ, ಜಿ: ಚಿಕ್ಕಬಳ್ಳಾಪುರ | ನಾಟಕ | 3,600–00 | 61 |
| 1581. | 5. | ಶ್ರೀ ವೀರಣ್ಣ ಗೌಡ ಬಿನ್ ಲೇಟ್ ದೊಡ್ಡ ಗಂಗಪ್ಪ, ಚನ್ನೇನಹಳ್ಳಿ ಗ್ರಾಮ ಕಾದಲವೇಣಿ ಅಂಚೆ, ಕಸಬಾ ಹೋಬಳಿ ಗೌರೀಬಿದನೂರು ತಾಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | ನಾಟಕ | 3,500–00 | 61 |
| 1582. | 6. | ಶ್ರೀ ಕೆ. ಮುನಿಯಪ್ಪ ಬಿನ್ ಲೇಟ್ ಕಾಳಪ್ಪ, ಕುಪ್ಪಹಳ್ಳಿ ಗ್ರಾಮ ನಂದಿ ಅಂಚೆ & ಹೋಬಳಿ, ಚಿಕ್ಕಬಳ್ಳಾಪುರ ತಾಲೂಕು ಮತ್ತು ಜಿಲ್ಲೆ | ನಾಟಕ | 3,000–00 | 60 |
| 1583. | 7. | ಶ್ರೀ ಎನ್. ಅಶ್ವತ್ಥ ನಾರಾಯಣ ಬಿನ್ ಲೇಟ್ ಹೆಚ್. ನಾರಾಯಣಪ್ಪ ಚೌಡರೆಡ್ಡಿ ಪಾಳ್ಯ, 3ನೇ ಮುಖ್ಯರಸ್ತೆ ಮಸೀದಿ ಹಿಂಭಾಗ, ಚಿಂತಾಮಣಿ ತಾಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | ನಾಟಕ | 3,500–00 | 60 |

**ಸಂಗೀತ ನೃತ್ಯ**

| | | | | | |
|---|---|---|---|---|---|
| 1584. | 8. | ಶ್ರೀ ಎನ್.ನಾರಾಯಣಪ್ಪ ಗ್ರಾಮ:ಬೀದಲಹಳ್ಳಿ, ಅಂಚೆ:ಹೋಬಳಿ: ಚಿಲಕಲನೇರ್ಪು, ತಾ:ಚಿಂತಾಮಣಿ, ಈ:ಚಿಕ್ಕಬಳ್ಳಾಪುರ. | ಸಂಗೀತ | 9,000–00 | 69 |
| 1585. | 9. | ಶ್ರೀ ಕೆ.ವಿ.ವೆಂಕಟರಮಣಪ್ಪ 246/ಡಿ, ಸೊಪ್ಪಿನ ಪೇಟೆ, ನಾಮಗೊಂಡ್ಲು, ನಾರಯಣಪ್ಪ ಮನೆ ರಸ್ತೆ ಎ ಬ್ಲಾಕ್, ಗುಡಿಬಂಡೆ ಟೌನ್, ಜಿ:ಚಿಕ್ಕಬಳ್ಳಾಪುರ. | ಭಜನೆ ಕಥಾಕೀರ್ತನ | 9,000–00 | 68 |
| 1586. | 10. | ಶ್ರೀ ಎಂ.ಆಂಜನೇಯಲು 3ನೇ ಕ್ರಾಸ್, ಚೌಡರೆಡ್ಡಿ ಪಾಳ್ಯ, ಚಿಂತಾಮಣಿ ನಗರ, ಜಿ:ಚಿಕ್ಕಬಳ್ಳಾಪುರ | ತಬಲಾ | 11,000–00 | 67 |
| 1587. | 11. | ಶ್ರೀ ಮುಖವೀಣೆ ತಿಮ್ಮಯ್ಯ ಬಿನ್ ನಾಗಪ್ಪ ಗವಿಕುರುಬಳ್ಳಿ ಗ್ರಾಮ, ದಪ್ಪರ್ತಿ ಅಂಚೆ, ಕಸಬಾ ಹೋಬಳಿ, ಗುಡಿಬಂಡೆ ತಾಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | ಕರ್ನಾಟಕ ಸಂಗೀತ ಮುಖವೀಣೆ | 3,600–00 | 64 |
| 1588. | 12. | ಶ್ರೀ ಆವಲುಮೂರ್ತಿಗೋವಿಂದಪ್ಪ, ಗ್ರಾ:ಹೋ:ಅಂಚೆ:ಡಿ.ಪಾಳ್ಯ, ಗ್ರಾಮ ಮುಖ್ಯ ರಸ್ತೆ, ತಾ:ಗೌರೀಬಿದನೂರು ಜಿ:ಚಿಕ್ಕಬಳ್ಳಾಪುರ | ಕರ್ನಾಟಕ ಸಂಗೀತ ಡೋಲು | 10,000–00 | 63 |
| 1589. | 13. | ಶ್ರೀ ಸಿ.ಎನ್.ಲಕ್ಷ್ಮೀನಾರಾಯಣಪ್ಪ ತಂದೆ ಲೇಟ್ ಚಿಕ್ಕನಾರಾಯಣಪ್ಪ ಪಟಾಲಪ್ಪ ಕಲ್ಲಿನ ಮನೆ ಹಿಂಬಾಗ, 3ನೇ ಹಂತ, ದಕ್ಷಿಣದ ಕಡೆಗೆ, ಅಂಜನಿ ಬಡಾವಣೆ, ಚಿಂತಾಮಣಿ ಟೌನ್, ಜಿ:ಚಿಕ್ಕಬಳ್ಳಾಪುರ | ಕರ್ನಾಟಕ ಸಂಗೀತ ನಾದಸ್ವರ | 11,000–00 | 62 |
| 1590. | 14. | ಶ್ರೀ ಶ್ರೀನಿವಾಸಪ್ಪ ತಂದೆ ಕ್ರಿಷ್ಣಪಲು ಆನೂರು ಗ್ರಾಮ, ತಿಪ್ಪೇನಹಳ್ಳಿ ಅಂಚೆ, ಹೋ:ಕಸಬಾ, ತಾ:ಶಿಡ್ಲಘಟ್ಟ, ಜಿ:ಚಿಕ್ಕಬಳ್ಳಾಪುರ. | ಕರ್ನಾಟಕ ಸಂಗೀತ ಡೋಲು | 10,000–00 | 62 |
| 1591. | 15. | ಶ್ರೀ ಎನ್.ಎಸ್.ವೆಂಕಟೇಶ್ ತಂದೆ ಎನ್.ಎಸ್. ಶ್ರೀನಿವಾಸಮೂರ್ತಿ ನೆಲಮಾಕಲಹಳ್ಳಿ ಗ್ರಾಮ, ಕೇಶವರ ಅಂಚೆ, ನಂದಿ ಹೋಬಳಿ, ತಾ:ಜಿ:ಚಿಕ್ಕಬಳ್ಳಾಪುರ | ಕರ್ನಾಟಕ ಸಂಗೀತ ಮೃದಂಗ | 10,000–00 | 62 |
| 1592. | 16. | ಶ್ರೀ ಕೆ.ಪಿ.ಗಂಗಾಧರಪ್ಪ ತಂದೆ ಪುಟ್ಟಯ್ಯ, ಕಂಬಾಲಹಳ್ಳಿ ಗ್ರಾಮ, ಅಂಚೆ:ಬೇವಿನಹಳ್ಳಿ, ಹೋ:ತೊಂಡೇಬಾವಿ, ತಾ:ಗೌರಿಬಿದನೂರು, ಜಿ:ಚಿಕ್ಕಬಳ್ಳಾಪುರ. | ಹಿಂದೂಸ್ತಾನಿ ಸಂಗೀತ ತಬಲಾ | 10,000–00 | 61 |

| | | | | | |
|---|---|---|---|---|---|
| 1593. | 17. | ಶ್ರೀ ನಾರಾಯಣಸ್ವಾಮಿ ತಂದೆ ವೆಂಕಟರೋಣಪ್ಪ ಆನೂರು ಗ್ರಾಮ, ಕಸಬಾ ಹೋಬಳಿ, ತಾ:ಶಿಡ್ಲಘಟ್ಟ, ತಿಪ್ಪೇನಹಳ್ಳಿ ಪೋಸ್ಟ್, ಜಿ:ಚಿಕ್ಕಬಳ್ಳಾಪುರ. | ಕರ್ನಾಟಕ ಸಂಗೀತ ಡೋಲು ವಾದನ | 10,000–00 | 60 |
| 1594. | 18. | ಶ್ರೀ ಕೃಷ್ಣಪ್ಪ ತಂದೆ ದಿ॥ ಚಿಕ್ಕ ಆಂಜಿನಪ್ಪ ಹುಣಸೇನಹಳ್ಳಿ, ಮೇಳ್ಯ ಅಂಚೆ, ನಗರಗೆರೆ ಹೋಬಳಿ, ತಾ:ಗೌರಿಬಿದನೂರು, ಜಿ:ಚಿಕ್ಕಬಳ್ಳಾಪುರ | ಕರ್ನಾಟಕ ಸಂಗೀತ ನಾದಸ್ವರ | 9,500–00 | 60 |
| 1595. | 19. | ಶ್ರೀ ಎಂ. ರಾಮಪ್ಪ ತಂದೆ ಚಿಕ್ಕಮುನಿಯಪ್ಪ ಶೆಟ್ಟಹಳ್ಳಿ ಅಂಚೆ, ಅಂಬಾಜದುರ್ಗ ಹೋಬಳಿ ಚಿಂತಾಮಣಿ ತಾಲೂಕು ಚಿಕ್ಕಬಳ್ಳಾಪುರ ಜಿಲ್ಲೆ. | ಸಂಗೀತ | 3,600–00 | 60 |
| 1596. | 20. | ಶ್ರೀ ವೈ.ವಿ ನಂದೀಶ್ವರಪ್ಪ ಬಿನ್ ಬಿ. ವೆಂಕಟಸ್ವಾಮಪ್ಪ, ಯರ್ರನಾಗೇನಹಳ್ಳಿ ಗ್ರಾಮ, ಎಸ್.ದೇವಗಾನಹಳ್ಳಿ ಸಾದಲಿ ಹೋಬಳಿ, ಶಿಡ್ಲಘಟ್ಟ ತಾಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | ಕರ್ನಾಟಕ ಸಂಗೀತ ನಾದಸ್ವರ | 3,600–00 | 54 |

**ನಾಟಕ**

**ಕಾರವಾರ (ಉತ್ತರ ಕನ್ನಡ) ಜಿಲ್ಲೆ**

| | | | | | |
|---|---|---|---|---|---|
| 1597. | 1. | ಶ್ರೀ ಭುಜಂಗ ರಾಮಾನಾಯ್ಕ ಬಿನ್ ರಾಮಾ ನಾಯ್ಕ್ ಮುಕ್ಕಾಂ ಗೋರ್ಸಗದ್ದೆ, ಹಾಸಣಗಿ ಪೋ ಗ್ರಾಮ ಕೋಸಗುಳ್ಳಿ, ತಾ:ಯಲ್ಲಾಪುರ ಕಾರವಾರ(ಉ.ಕ)–581347 | ನಾಟಕ | 11,000–00 | 60 |

**ಜಾನಪದ**

| | | | | | |
|---|---|---|---|---|---|
| 1598. | 2. | ದೇವರಾಯ ಮಂಜುನಾಥ ನಾಯ್ಕ ತಂದೆ ಮಂಜುನಾಥ ದೇವರು ನಾಯ್ಕ ಸಾಲಕೋಡ ಗ್ರಾಮ, ಹೊನ್ನಾವರ ಹೋಬಳಿ, ಉತ್ತರ ಕನ್ನಡ ಜಿಲ್ಲೆ | **ಕೋಲಾಟ** | 3,600–00 | **63** |
| 1599. | 3. | ಗುಡ್ಡಪ್ಪ ತಂದೆ ನೀಲಪ್ಪ ಜೋಗಿ ಸಾ:ಅಂಚೆ ಬನವಾಸಿ ಶಿರಸಿ ತಾಲೂಕು, ಉತ್ತರ ಕನ್ನಡ ಜಿಲ್ಲೆ | ಕಿನ್ನರಿಜೋಗಿ | 3,400–00 | 62 |

**ಯಕ್ಷಗಾನ**

| | | | | | |
|---|---|---|---|---|---|
| 1600. | 4. | ಶ್ರೀ ಸುಬ್ರಹ್ಮಣ್ಯ ಮಹಾಬಲೇಶ್ವರ ಹೆಗಡೆ ಬಿನ್ ಮಹಾಬಲೇಶ್ವರ ಹೆಗಡೆ ಹೊಸಾಕುಳಿ ಅಂಚೆ/ಗ್ರಾಮ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಯಕ್ಷಗಾನ | 12,000–00 | 64 |
| 1601. | 5. | ಶ್ರೀ ಉಮೇಶ ಸುಬ್ಬು ನಾಯ್ಕ ಬಿನ್ ಸುಬ್ಬು ನಾಯ್ಕ ಬಳಕೂರು ಗ್ರಾಮ/ಅಂಚೆ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಯಕ್ಷಗಾನ | 10,000–00 | 62 |
| 1602. | 6. | ಶ್ರೀ ಮಾಹಾದೇವ ಮಾಸ್ತಿ ಪಟಗಾರ ಬಿನ್. ನಾರಾಯಣ ಪಟಗಾರ ಮೂಜನಕೇರಿ ಗ್ರಾಮ, ಹೆಗಡೆ ಅಂಚೆ, ಕುಮಟಾ ತಾಲೂಕು, ಉತ್ತರ ಕನ್ನಡ ಜಿಲ್ಲೆ. | ಯಕ್ಷಗಾನ | 11,000–00 | 61 |

**ಜಾನಪದ**

**ಕೊಡಗು (ಮಡಿಕೇರಿ) ಜಿಲ್ಲೆ**

| | | | | | |
|---|---|---|---|---|---|
| 1603. | 1. | ನರಸಯ್ಯ ಹೆಚ್.ಕೆ. ತಂದೆ ಕಾಡಯ್ಯ ಹೆಚ್. ನಂ.203, ಶ್ರೀ ಚೌಡೇಶ್ವರಿನಗರ, ಕಾರ್ಮಾಡು ಗ್ರಾಮ, ಅಮ್ಮತ್ತಿ ಅಂಚೆ–571211 ವೀರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ | ಮೋರಿವಾದ್ಯ ಕಲೆ | 11,000–00 | 59 |

**ಸಿದ್ರಾಮಪ್ಪ ಹ. ತಳವಾರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ, ಮತ್ತು ವಾರ್ತಾ ಇಲಾಖೆ (ಸಂಸ್ಕೃತಿ)

**PR. 461**
**SC.1000**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆ ಒದಗಿಸಲು "ಜ್ಯೋತಿ ಸಂಜೀವಿನಿ" ಯೋಜನೆಯನ್ನು 2014-15ನೇ ಸಾಲಿನಿಂದ ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:-** 1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಮನವಿ ದಿನಾಂಕ.29/06/2011.

2. ಮಾನ್ಯ ಮುಖ್ಯಮಂತ್ರಿಯವರು ದಿನಾಂಕ. 14/02/2014 ರಂದು ಮಂಡಿಸಿದ 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಿರುವ ಘೋಷಣೆ.

**ಪ್ರಸ್ತಾವನೆ:-**

ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963 ರನ್ವಯ ಸರ್ಕಾರಿ ಆಸ್ಪತ್ರೆಗಳಲ್ಲಿ ಮತ್ತು ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಗಳಲ್ಲಿ ಪಡೆದ ವೈದ್ಯಕೀಯ ಚಿಕಿತ್ಸೆಗಳಿಗೆ ತಗಲುವ ವೆಚ್ಚವನ್ನು ಸಿ.ಜಿ.ಹೆಚ್.ಎಸ್.ಪ್ಯಾಕೇಜ್ ದರದಂತೆ ಮರುಪಾವತಿ ಮಾಡಲಾಗುತ್ತಿದೆ. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರು ಸರ್ಕಾರದಿಂದ ಮಾನ್ಯತೆ ಪಡೆದ ವಿವಿಧ ಖಾಸಗಿ ಆಸ್ಪತ್ರೆಗಳಲ್ಲಿ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಅವಲಂಬಿತ ಸದಸ್ಯರು ಚಿಕಿತ್ಸೆ ಪಡೆದ ಸಂದರ್ಭಗಳಲ್ಲಿ ಆಸ್ಪತ್ರೆಗಳು ವಿಧಿಸುವ ದರ ಮತ್ತು ಸರ್ಕಾರದಿಂದ ಮರು ಪಾವತಿಯಾಗುತ್ತಿರುವ ಮೊತ್ತದ ಪ್ರಮಾಣದಲ್ಲಿ ವ್ಯತ್ಯಾಸವಿದ್ದು, ಇದರಿಂದ ಸರ್ಕಾರಿ ನೌಕರರೆ ಹೆಚ್ಚಿನ ಚಿಕಿತ್ಸಾ ವೆಚ್ಚವನ್ನು ಭರಿಸಬೇಕಾದ ಪರಿಸ್ಥಿತಿ ಇರುವುದರಿಂದ ಸರ್ಕಾರಿ ನೌಕರರಿಗೆ ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆ ನೀಡುವ ಯೋಜನೆಯನ್ನು ಜಾರಿಗೊಳಿಸಲು ಬೇಡಿಕೆ ಸಲ್ಲಿಸಿರುತ್ತಾರೆ. ಸಂಘದ ಬೇಡಿಕೆ ಕುರಿತು ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಜಂಟಿ ಸಮಾಲೋಚನಾ ಸಭೆಯಲ್ಲಿ ಚರ್ಚಿಸಲಾಗಿರುತ್ತದೆ.

ಮಾನ್ಯ ಮುಖ್ಯಮಂತ್ರಿಯವರು ದಿನಾಂಕ:14/02/2014ರಂದು ಮಂಡಿಸಿದ 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ - "ಹಾಲಿ ಇರುವ ವೈದ್ಯಕೀಯ ವೆಚ್ಚ ಮರುಪಾವತಿ ನಿಯಮಗಳನುಸಾರ ಸರ್ಕಾರಿ ನೌಕರರು ವೆಚ್ಚ ಮರುಪಾವತಿಸಿಕೊಳ್ಳುವಲ್ಲಿನ ತೊಂದರೆಗಳನ್ನು ಪರಿಹರಿಸುವ ದೃಷ್ಟಿಯಿಂದ ಪ್ರಾಯೋಗಿಕವಾಗಿ 7 ಮಾರಣಾಂತಿಕ ಕಾಯಿಲೆಗಳಿಗೆ ಸಂಬಂಧಪಟ್ಟಂತೆ ಮಾತ್ರ ನಗದುರಹಿತ ವೈದ್ಯಕೀಯ ಚಿಕಿತ್ಸಾ ಸೌಲಭ್ಯವನ್ನು ಸರ್ಕಾರಿ ನೌಕರರು ಮತ್ತು ಅವರ ಅವಲಂಬಿತರಿಗೆ ಒದಗಿಸಲು "ಜ್ಯೋತಿ ಸಂಜೀವಿನಿ" ಎಂಬ ನೂತನ ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಲಾಗಿದೆ" - ಎಂದು ಘೋಷಣೆ ಮಾಡಿರುತ್ತಾರೆ.

ರಾಜ್ಯ ಸರ್ಕಾರಿ ನೌಕರರಿಗೆ ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆ ಒದಗಿಸಲು ಯೋಜನೆಯ ರೂಪುರೇಷೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 14 ಎಸ್.ಎಂ.ಆರ್.2013 ಬೆಂಗಳೂರು, ದಿನಾಂಕ. 18-08-2014.**

ಸರ್ಕಾರವು ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರುಗಳಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆ ಒದಗಿಸಲು "ಜ್ಯೋತಿ ಸಂಜೀವಿನಿ" ಎಂಬ ನೂತನ ಯೋಜನೆಯನ್ನು 2014-15ನೇ ಸಾಲಿನಿಂದ ಜಾರಿಗೊಳಿಸಲು ಮಂಜೂರಾತಿ ನೀಡಿದೆ.

2. ಈ ಯೋಜನೆಯಡಿಯಲ್ಲಿ ಕೆಳಕಂಡ 7 ಮಾರಣಾಂತಿಕ ಖಾಯಿಲೆಗಳಿಗೆ ಸಂಬಂಧಿಸಿದಂತೆ ಗುರುತಿಸಲಾಗಿರುವ 449 ರೀತಿಯ ವೈದ್ಯಕೀಯ ಚಿಕಿತ್ಸಾ ವಿಧಾನಗಳು ಹಾಗೂ 50 ಮುಂದುವರಿದ ಚಿಕಿತ್ಸಾ ಸೌಲಭ್ಯಗಳು ನಗದುರಹಿತವಾಗಿ ದೊರಕುತ್ತವೆ.

| Sl No. | Diseases | No. of Treatment Procedures | No. of Follow up Procedures |
|---|---|---|---|
| 1. | Cardiac Speciality (Cardiothoracic Surgery, Cardiovascular Surgery and other Cardiac Surgeries) | 145 | 23 |
| 2. | Cancer (Surgical Oncology, Medical Oncology & Radiation Oncology) | 189 | 01 |
| 3. | Neuro Surgery (Cranial, Spinal and peripheral neurosurgeries) | 50 | 18 |
| 4. | Urology (renal and congenital malformations) | 21 | 08 |
| 5. | Burns (electrical shocks and scalds surgeries) | 11 | -- |
| 6. | Polytrauma cases (Not covered by Motor Vehicle Insurance) | 08 | -- |
| 7. | Paediatric and Neo-Natal Surgeries | 25 | -- |
| | **Total** | **449** | **50** |

3. ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 2ರನ್ವಯ "ಕುಟುಂಬ" ಪದದ ಅರ್ಥವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ಅವಲಂಬಿತ ಸದಸ್ಯರು ನಿಗದಿತ ಅರ್ಹತಾ ಮಾನದಂಡಗಳಿಗೆ ಒಳಪಟ್ಟು ನಗದುರಹಿತ ವೈದ್ಯಕೀಯ ಸೌಲಭ್ಯಗಳನ್ನು ಪಡೆಯುವರು.

ಅ. ಸರ್ಕಾರಿ ನೌಕರರ ಪತಿ / ಪತ್ನಿ

ಆ. ಸರ್ಕಾರಿ ನೌಕರರ ತಂದೆ ಮತ್ತು ತಾಯಿ (ಮಲತಾಯಿ ಒಳಗೊಂಡಂತೆ) (ಇವರು ಸರ್ಕಾರಿ ನೌಕರರ ಜೊತೆಯಲ್ಲಿ ಸಾಧಾರಣವಾಗಿ ವಾಸವಿರತಕ್ಕದ್ದು ಮತ್ತು ಇವರ ಮಾಸಿಕ ಆದಾಯ ರೂ. 6000-00ಗಳನ್ನು ಮೀರತಕ್ಕದ್ದಲ್ಲ).

ಇ. ಮಕ್ಕಳು (ದತ್ತು ಮಕ್ಕಳು ಹಾಗೂ ಮಲತಾಯಿ ಮಕ್ಕಳು ಒಳಗೊಂಡಂತೆ) ಇವರು ಸರ್ಕಾರಿ ನೌಕರರ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿರತಕ್ಕದ್ದು ಮತ್ತು ಯಾವುದೇ ಉದ್ಯೋಗ ಅಥವಾ ಆದಾಯವನ್ನು ಹೊಂದಿರತಕ್ಕದ್ದಲ್ಲ.

ಸರ್ಕಾರಿ ನೌಕರರು ತಮ್ಮ ಕುಟುಂಬದ ಸದಸ್ಯರ ಅವಲಂಬನೆಯ ಕುರಿತು ಮೇಲಿನಂತೆ ಘೋಷಣೆಯನ್ನು ಸಲ್ಲಿಸತಕ್ಕದ್ದು.

4. ರಾಜ್ಯ ಸರ್ಕಾರಿ ನೌಕರರು ಪಡೆಯುತ್ತಿರುವ ವೇತನ ಶ್ರೇಣಿಗನುಗುಣವಾಗಿ ಈ ಕೆಳಕಂಡ ದರ್ಜೆಯ ವಾರ್ಡ್‌ಗಳಲ್ಲಿ ಚಿಕಿತ್ಸೆ ಪಡೆಯಲು ಅರ್ಹರಾಗಿರುತ್ತಾರೆ.

| | Range of Pay | Category of Ward/class of Accommodations To which entiled |
|---|---|---|
| i) | Up to Rs.16,000 per month | General Ward |
| ii) | Rs.16,001 to Rs.43,200 | Semi Private Ward |
| iii) | Rs.43,201 and above | Private Ward |

5. ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರುಗಳಿಗೆ ಈಗಾಗಲೇ ಪ್ರತ್ಯೇಕ ಆರೋಗ್ಯ ಯೋಜನೆಗಳು ಜಾರಿಯಾಗುತ್ತಿದ್ದಲ್ಲಿ ಅವರುಗಳಿಗೆ "ಜ್ಯೋತಿ ಸಂಜೀವಿನಿ" ಯೋಜನೆಯು ಅನ್ವಯವಾಗುವುದಿಲ್ಲ.

6. "ಜ್ಯೋತಿ ಸಂಜೀವಿನಿ" ಯೋಜನೆಯಡಿಯಲ್ಲಿ ಮೇಲೆ ತಿಳಿಸಿದ 7 ಮಾರಣಾಂತಿಕ ಖಾಯಿಲೆಗಳಿಗೆ ನಗದುರಹಿತ ಚಿಕಿತ್ಸೆ ದೊರಕುವುದರಿಂದ, ಇವುಗಳಿಗೆ ವೈದ್ಯಕೀಯ ವೆಚ್ಚ ಮರುಪಾವತಿ ನಿಯಮಗಳು ಅನ್ವಯವಾಗುವುದಿಲ್ಲ. ಈ ಸಂಬಂಧದಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ಕ್ಕೆ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

7. ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರು ಹೊಂದಿರುವ "ಆಧಾರ್ ಕಾರ್ಡ್"ಗಳನ್ನು ಈ ಯೋಜನೆಯಡಿಯಲ್ಲಿ ಸೌಲಭ್ಯಗಳನ್ನು ಪಡೆಯಲು ಗುರುತಿನ ಚೀಟಿಯನ್ನಾಗಿ ಪರಿಗಣಿಸಲಾಗುವುದು."ಆಧಾರ್ ಕಾರ್ಡ್" ಹೊಂದಿರುವ ಸರ್ಕಾರಿ ನೌಕರರು ಯು.ಐ.ಡಿ. ನಂಬರನ್ನು ವೇತನ ಬಟವಾಡೆ ಅಧಿಕಾರಿಗಳ ಮೂಲಕ ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಲು ಕ್ರಮಕೈಗೊಳ್ಳತಕ್ಕದ್ದು. "ಆಧಾರ್ ಕಾರ್ಡ್" ಹೊಂದಿಲ್ಲದೆ ಇರುವ ಸರ್ಕಾರಿ ನೌಕರರು ಮತ್ತು ಅವರ ಕುಟುಂಬ ಸದಸ್ಯರ ಭಾವಚಿತ್ರ ಸಹಿತ ವಿವರಗಳನ್ನು ಸಂಬಂಧಪಟ್ಟ ವೇತನ ಬಟವಾಡೆ ಅಧಿಕಾರಿಗಳು ಪಡೆದು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಬೇಕು ಹಾಗೂ ಅದನ್ನು ಗುರುತಿನ ಚೀಟಿಯನ್ನಾಗಿ "ಆಧಾರ್ ಕಾರ್ಡ್" ಲಭ್ಯವಾಗುವವರೆಗೆ ಬಳಸಲಾಗುವುದು.

8. "ಜ್ಯೋತಿ ಸಂಜೀವಿನಿ" ಯೋಜನೆಯನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್"ಗೆ ವಹಿಸಲಾಗಿದೆ. ಈ ಟ್ರಸ್ಟ್ ಹೊಂದಿರುವ ನೆಟ್‌ವರ್ಕ್ ಆಸ್ಪತ್ರೆಗಳ (ಹೊರ ರಾಜ್ಯದಲ್ಲಿರುವ ಆಸ್ಪತ್ರೆಗಳು ಒಳಗೊಂಡಂತೆ) ಮುಖಾಂತರ "ಜ್ಯೋತಿ ಸಂಜೀವಿನಿ" ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದು ರಹಿತ ವೈದ್ಯಕೀಯ ಚಿಕಿತ್ಸೆಯನ್ನು ಒದಗಿಸತಕ್ಕದ್ದು, ಹಾಗೂ ಈ ಯೋಜನೆಯ ನಿರ್ವಹಣೆಯನ್ನು ಮಾಡತಕ್ಕದ್ದು. ಇದಕ್ಕಾಗಿ "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" ಹಾಲಿ ಇರುವ ನೆಟ್‌ವರ್ಕ್ ಆಸ್ಪತ್ರೆಗಳು ಹಾಗೂ ಗುರುತಿಸಲಾಗುವ ಇತರೆ ಆಸ್ಪತ್ರೆಗಳೊಂದಿಗೆ "ಜ್ಯೋತಿ ಸಂಜೀವಿನಿ" ಯೋಜನೆ ಅನುಷ್ಠಾನಗೊಳಿಸುವ ಕುರಿತು ದರ ನಿಗದಿಗೊಳಿಸಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

9. "ಜ್ಯೋತಿ ಸಂಜೀವಿನಿ" ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಲು ವಾರ್ಷಿಕ ಅಂದಾಜು ರೂ.90 ಕೋಟಿ ಹಾಗೂ ಈ ಯೋಜನೆಯನ್ನು ಅನುಷ್ಠಾನಗೊಳಿಸಲು "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್"ಗೆ ನೀಡಬೇಕಾದ ವಾರ್ಷಿಕ ಆಡಳಿತಾತ್ಮಕ ವೆಚ್ಚ ರೂ.3–00 ಕೋಟಿಗಳ ವೆಚ್ಚವನ್ನು ಭರಿಸಲು ಮಂಜೂರಾತಿ ನೀಡಲಾಗಿದೆ. ಕರ್ನಾಟಕ ಸರ್ಕಾರ ಆರೋಗ್ಯ ಕಲ್ಯಾಣ ಟ್ರಸ್ಟ್‌ಗೆ ಈಗಾಗಲೇ ರೂ.5–00 ಕೋಟಿಗಳನ್ನು ಬಿಡುಗಡೆ ಮಾಡಿದ್ದು, 2014–15ನೇ ಸಾಲಿನಲ್ಲಿ ಆಯವ್ಯಯದ ಪೂರಕ ಅಂದಾಜು (ಒಂದನೇ ಕಂತು) ಗಳಲ್ಲಿ ಈ ಬಾಬ್ತಿಗೆ ರೂ.10 ಕೋಟಿ ಅನುದಾನವನ್ನು ಒದಗಿಸಲಾಗುವುದು. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ಈ ಮೊತ್ತದಲ್ಲಿ "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್"ಗೆ "ಜ್ಯೋತಿ ಸಂಜೀವಿನಿ" ಯೋಜನೆ ಅನುಷ್ಠಾನದ ಆಡಳಿತಾತ್ಮಕ ವೆಚ್ಚಕ್ಕಾಗಿ 2014–15ನೇ ಸಾಲಿಗೆ ರೂ.2–00 ಕೋಟಿಗಳನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

10. "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" "ಜ್ಯೋತಿ ಸಂಜೀವಿನಿ" ಯೋಜನೆ ಅನುಷ್ಠಾನ ಮತ್ತು ನಿರ್ವಹಣೆಗೆ ಅಗತ್ಯ ಸಿಬ್ಬಂದಿ, ವಾಹನ ಮತ್ತು ಪೀಠೋಪಕರಣಗಳನ್ನು ವ್ಯವಸ್ಥೆಗೊಳಿಸಲು ಸಚಿವಾಲಯದ ಆಡಳಿತ ಇಲಾಖೆಯಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಆಡಳಿತಾತ್ಮಕ ಮಂಜೂರಾತಿಯನ್ನು ಪಡೆದುಕೊಳ್ಳುವುದು.

11. "ಜ್ಯೋತಿ ಸಂಜೀವಿನಿ" ಯೋಜನೆಯಡಿಯಲ್ಲಿ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದು ರಹಿತ ವೈದ್ಯಕೀಯ ಚಿಕಿತ್ಸೆ ಒದಗಿಸುವ ನೆಟ್‌ವರ್ಕ್ ಆಸ್ಪತ್ರೆಗಳು ವೈದ್ಯಕೀಯ ವೆಚ್ಚದ ಬಿಲ್ಲುಗಳನ್ನು ನಿಗದಿತ ದರಗಳಲ್ಲಿ ತಯಾರಿಸಿ "ಸುವರ್ಣ ಅರೋಗ್ಯ ಸುರಕ್ಷಾ ಟ್ರಸ್ಟ್"ಗೆ ಸಲ್ಲಿಸತಕ್ಕದ್ದು. "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" ಅಥವಾ ಸಂಬಂಧಿಸಿದ ಪ್ರಾಧಿಕಾರ ಈ ಬಿಲ್ಲುಗಳನ್ನು ಐಟಂವಾರು ಪರಿಶೀಲಿಸಿ ಚೆಕ್ ಮುಖಾಂತರ ಆಸ್ಪತ್ರೆಗೆ ಪಾವತಿಸತಕ್ಕದ್ದು. ವೈದ್ಯಕೀಯ ವೆಚ್ಚದ ಬಿಲ್ಲುಗಳಲ್ಲಿನ ನಾನ್ ಮೆಡಿಕಲ್ ಐಟಂಗಳು (ದೂರವಾಣಿ ಬಿಲ್, ಆಹಾರ, ಪಾನೀಯ, ಟಿ.ವಿ.) ಇತ್ಯಾದಿಗಳ ವೆಚ್ಚವನ್ನು ಹಾಗೂ ಅರ್ಹತೆಗಿಂತ ಹೆಚ್ಚಿನ ದರ್ಜೆಯ ವಾರ್ಡಿನಲ್ಲಿ ಚಿಕಿತ್ಸೆ ಪಡೆದ ಹೆಚ್ಚುವರಿ ವೆಚ್ಚವನ್ನು ಮತ್ತು ಅಗತ್ಯವಿರುವ ಚಿಕಿತ್ಸಾ ವಿಧಾನದಲ್ಲಿ ನಿಗದಿಪಡಿಸಿರುವ ಪ್ಯಾಕೇಜ್ ದರದಲ್ಲಿನ ಹೆಚ್ಚುವರಿಯಾದ ವ್ಯತ್ಯಾಸದ ಮೊಬಲಗನ್ನು ಸರ್ಕಾರಿ ನೌಕರರೇ ನೇರವಾಗಿ ಆಸ್ಪತ್ರೆಗೆ ಪಾವತಿಸತಕ್ಕದ್ದು. ಚಿಕಿತ್ಸೆಯ ಸಂದರ್ಭದಲ್ಲಿ ಗುರುತಿಸಲಾಗಿಲ್ಲದ ಬೇರೊಂದು ಚಿಕಿತ್ಸಾ ವಿಧಾನವನ್ನು ರೋಗಿಯ ಹಿತದೃಷ್ಟಿಯಿಂದ ನೀಡಬೇಕೆಂದು ಆಸ್ಪತ್ರೆಯ ತಜ್ಞರು ನಿರ್ಧರಿಸಿದಲ್ಲಿ, ಅದರ ವೆಚ್ಚವನ್ನು "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" ಪರಿಶೀಲಿಸಿ ತಜ್ಞರ ಅಭಿಪ್ರಾಯ ಪಡೆದು ಪಾವತಿಸುವುದು.

12. "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್", ಸರ್ಕಾರಿ ನೌಕರರು ಮತ್ತು ಚಿಕಿತ್ಸೆ ನೀಡುವ ಆಸ್ಪತ್ರೆಗಳ ನಡುವೆ ಸಂವಹನ, ಪಾರದರ್ಶಕತೆ ಕಾಯ್ದುಕೊಳ್ಳಲು ಹಾಗೂ ಸಮಸ್ಯೆಗಳ ಪರಿಹಾರಕ್ಕಾಗಿ ಮತ್ತು ಸೌಲಭ್ಯಗಳಲ್ಲಿನ ಸುಧಾರಣೆಗಾಗಿ ಕುಂದು–ಕೊರತೆಗಳ ಒಂದು ಕೋಶವನ್ನು ರಚಿಸುವುದು. ಇದಲ್ಲದೆ ಒಂದು ವೆಬ್‌ಸೈಟ್ ನಿರ್ಮಿಸಿ "ಜ್ಯೋತಿ ಸಂಜೀವಿನಿ" ಯೋಜನೆಯಡಿಯಲ್ಲಿ ಲಭ್ಯವಾಗುವ ಚಿಕಿತ್ಸೆಗಳು, ಸೌಲಭ್ಯಗಳು, ಆಸ್ಪತ್ರೆಗಳ ವಿವರಗಳು ಇತ್ಯಾದಿ ಮಾಹಿತಿಗಳು ಆನ್‌ಲೈನ್‌ನಲ್ಲಿ ಲಭ್ಯವಾಗುವಂತೆ ಮಾಡುವುದು.

13. "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" 3 ತಿಂಗಳಿಗೊಮ್ಮೆ ಸಭೆ ಸೇರಿ "ಜ್ಯೋತಿ ಸಂಜೀವಿನಿ" ಯೋಜನೆಯ ಅನುಷ್ಠಾನ ಹಾಗೂ ನಿರ್ವಹಣೆ ಕುರಿತು ಪರಿಶೀಲಿಸತಕ್ಕದ್ದು. "ಕರ್ನಾಟಕ ಸರ್ಕಾರ ಆರೋಗ್ಯ ಕಲ್ಯಾಣ ಟ್ರಸ್ಟ್"ಗೆ ಯೋಜನೆಯ ಅನುಷ್ಠಾನದ ವಿವರಗಳು, ವೆಚ್ಚದ ವಿವರಗಳನ್ನು ನಿಯಮಿತವಾಗಿ ಸಲ್ಲಿಸುವುದು.

14. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಎಫ್‌ಡಿ/413/ವೆಚ್ಚ–12/2014 ದಿನಾಂಕ 27/05/2014 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ.ವೆಂಕಟೇಶಮೂರ್ತಿ**

ಸರ್ಕಾರದ ಉಪ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಕರ್ನಾಟಕ ಸರ್ಕಾರ ಆರೋಗ್ಯ ಕಲ್ಯಾಣ ಟ್ರಸ್ಟ್)

**PR. 626**
**SC. 500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶಕ್ಕೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 527 ಸಅಸೇ 2013, ದಿನಾಂಕ:09-07-2013.
2. ಹೈದ್ರಾಬಾದ್ ಕರ್ನಾಟಕ ವಿಶೇಷ ಕೋಶ ಕಡತ ಸಂಖ್ಯೆ: ಸಿಆಸುಇ 02 ಹೈಕೋ 2013 ಹಾಗೂ ಸಿಆಸುಇ 02 ಹೈಕೋ 2013(ಭಾ-1).

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 527 ಸಅಸೇ 2013, ದಿನಾಂಕ:09.08.2013ರಲ್ಲಿ ಜಂಟಿ ಕಾರ್ಯದರ್ಶಿಗಳ ಮೇಲುಸ್ತುವಾರಿಯಲ್ಲಿ ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶವನ್ನು ಸೃಜಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶದ ಕಡತದಲ್ಲಿ ಸಂವಿಧಾನದ ಕಲಂ 371ಜೆ ರನ್ವಯ ಹೈದ್ರಾಬಾದ್-ಕರ್ನಾಟಕದ ವಿಶೇಷ ಕೋಶದಲ್ಲಿ ಹೈದ್ರಾಬಾದ್-ಕರ್ನಾಟಕ ವಿಶೇಷ ಸ್ಥಾನಮಾನ ಕಲ್ಪಿಸುವ ಸಂಬಂಧ ಶಿಕ್ಷಣ ಇಲಾಖೆ, ವೈದ್ಯಕೀಯ ಶಿಕ್ಷಣ ಇಲಾಖೆ, ಕಾರ್ಮಿಕ ಇಲಾಖೆ, ಸಿ.ಆ.ಸು.ಇ (ಸೇವಾ ನಿಯಮಗಳು), ನಗರಾಭಿವೃದ್ಧಿ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ಕಂದಾಯ ಮತ್ತಿತರ ಇಲಾಖೆಗಳ ವ್ಯಾಪ್ತಿಗೆ ಬರುವ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಜಾರಿಗೊಳಿಸಲು, ಪರಮರ್ಶಿಸಲು, ಉಸ್ತುವಾರಿ ಮೌಲ್ಯಮಾಪನ ಕಾರ್ಯ ಹಾಗೂ ಸದರಿ ಮಾಹಿತಿಗಳನ್ನು ಕ್ರೋಢೀಕರಿಸಿ ಸಚಿವ ಸಂಪುಟ ಉಪ ಸಮಿತಿಯ ಮುಂದೆ ಸಲ್ಲಿಸುವ ಸಂಬಂಧ ದತ್ತಾಂಶಗಳನ್ನು ಕ್ರೋಢೀಕರಿಸಲು ಸಾಫ್ಟ ವೇರ್ ಅಳವಡಿಸಿ ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶವನ್ನು ಬಲಗೊಳಿಸಬೇಕಾಗಿರುವುದರಿಂದ ಸಾಂಖ್ಯಿಕ ದತ್ತಾಂಶಗಳ ನಿರ್ವಹಣೆಗೆ ಸಾಂಖ್ಯಿಕ ಮತ್ತು ಆರ್ಥಿಕ ನಿರ್ದೇಶನಾಲಯದ ಒಬ್ಬರು ಜಂಟಿ ನಿರ್ದೇಶಕರು ಹಾಗೂ ಒಬ್ಬರು ಸಂಶೋಧನಾಧಿಕಾರಿಗಳ ಸೇವೆ ಪಡೆಯುವುದು ಅಗತ್ಯವಿರುತ್ತದೆ ಹಾಗೂ ಈ ದತ್ತಾಂಶ ನಿರ್ವಹಣೆಗೆ ಪೋರ್ಟಲ್ ವ್ಯವಸ್ಥೆ ನಿರ್ವಹಿಸಲು ಒಬ್ಬರು ICT Expert ಮತ್ತು ಇಬ್ಬರು ಡಾಟಾ ಎಂಟ್ರಿ ಆಪರೇಟರ್ಸ್‌ಗಳ ಅಗತ್ಯವಿದ್ದು ಈ ಹುದ್ದೆಗಳನ್ನು ಸೃಜಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ (2)ರ ಹೈದ್ರಾಬಾದ್ ಕರ್ನಾಟಕ ವಿಶೇಷ ಕೋಶದ ಭಾಗ-1ರ ಕಡತದಲ್ಲಿ ಹೈದ್ರಾಬಾದ್ ಕರ್ನಾಟಕದ ವಿಶೇಷ ಕೋಶದ ಅಡಿಯಲ್ಲಿ 1. ಆಡಳಿತ ಮತ್ತು ಸಮನ್ವಯ ವಿಭಾಗ. 2. ಉಸ್ತುವಾರಿ ಮತ್ತು ಮೌಲ್ಯಮಾಪನ ವಿಭಾಗ, 3. ಐಸಿಟಿ ಮತ್ತು ಅಂತರ್‌ಜಾಲ ನಿರ್ವಹಣೆ ಎಂ.ಐ.ಎಸ್. ವಿಭಾಗ ಇವುಗಳನ್ನು ರಚಿಸಿ ಸದರಿ ವಿಭಾಗಗಳಿಗೆ ಈ ಕೆಳಕಂಡಂತೆ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

1. **ಆಡಳಿತ ಮತ್ತು ಸಮನ್ವಯ ವಿಭಾಗ:** ಒಂದು ಅಧೀನ ಕಾರ್ಯದರ್ಶಿ, ಒಂದು ಶಾಖಾಧಿಕಾರಿ, ಒಂದು ಶೀಘ್ರಲಿಪಿಗಾರರು, ಒಂದು ಗ್ರೂಪ್ 'ಡಿ' ಹುದ್ದೆಗಳನ್ನು ಹಾಗೂ ಗೌರವಾನ್ವಿತ ರಾಜ್ಯಪಾಲರ ಸಲಹೆಗಾರರನ್ನಾಗಿ ನಿವೃತ್ತ ಐ.ಎ.ಎಸ್ ಅಧಿಕಾರಿಯನ್ನು ನೇಮಿಸಲು ಒಂದು ವೇತನಶ್ರೇಣಿ ರಹಿತ ಗೌರವಾನ್ವಿತ ರಾಜ್ಯಪಾಲರ ಸಲಹೆಗಾರರ ಹುದ್ದೆಯನ್ನು ಸೃಜಿಸಲು,
2. **ಉಸ್ತುವಾರಿ ಮತ್ತು ಮೌಲ್ಯಮಪನ ವಿಭಾಗ:** ಈ ವಿಭಾಗವು ನಿರ್ದೇಶಕರು, ಕಾರ್ಯಕ್ರಮ ಉಸ್ತುವಾರಿ ಹಾಗೂ ಅನುಷ್ಠಾನ ಇವರ ನೇತೃತ್ವದಲ್ಲಿ ಕಾರ್ಯನಿರ್ವಹಿಸಬೇಕಾಗಿದ್ದು, ಈ ಸಂಬಂಧ ಸಾಂಖ್ಯಿಕ ಮತ್ತು ಆರ್ಥಿಕ ಇಲಾಖೆಯ ಅಧಿಕಾರಿಯ ಸೇವೆಯನ್ನು ಬಳಸಿಕೊಳ್ಳಬೇಕಾಗಿದ್ದು, ಈ ವಿಭಾಗಕ್ಕೆ ನಿರ್ದೇಶಕರ ಒಂದು ವೇತನ ಶ್ರೇಣಿ ರಹಿತ ಹುದ್ದೆಯನ್ನು ಇಬ್ಬರು ಸಿಬ್ಬಂದಿಯೊಂದಿಗೆ ಸೃಜಿಸಲು,
3. **ಐಸಿಟಿ ಮತ್ತು ಅಂತರ್‌ಜಾಲ ನಿರ್ವಹಣಾ ಎಂ.ಐ.ಎಸ್ ವಿಭಾಗ:** ICT Expert ಹುದ್ದೆಯನ್ನು ಹಾಗೂ ಇಬ್ಬರು ಡೇಟಾ ಎಂಟ್ರಿ ಆಪರೇಟರ್ ಹುದ್ದೆಗಳನ್ನು ಸೃಜಿಸಲು,

ಈ ಪ್ರಸ್ತಾವನೆಯ ಬಗ್ಗೆ ಆರ್ಥಿಕ ಇಲಾಖೆಯ ಪರಿಶೀಲಸಿ, ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹಾಗೂ ಒಂದು ರೀಸರ್ಚ್ ಆಫೀಸರ್ ಹುದ್ದೆಯನ್ನು ಸೃಜಿಸಲು ಅನುಮತಿಸಿದೆ ICT Expert ಮತ್ತು ಹುದ್ದೆಯನ್ನು ಹಾಗೂ ಇಬ್ಬರು ಡೇಟಾ ಎಂಟ್ರಿ ಆಪರೇಟರ್‌ಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆಯುವಂತೆ ತಿಳಿಸಿದೆ.

ಮುಂದುವರೆದು, ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶದ ಆಡಳಿತ ಮತ್ತು ಸಮನ್ವಯ ವಿಭಾಗಕ್ಕೆ ಹೆಚ್ಚುವರಿಯಾಗಿ ಒಂದು ಅಧೀನ ಕಾರ್ಯದರ್ಶಿ ಹಾಗೂ ಒಂದು ಶಾಖಾಧಿಕಾರಿ ಹುದ್ದೆಯನ್ನು ಸೃಜಿಸಲು ಅನುಮತಿಸಿದೆ. ಈಗಾಗಲೇ ಒಂದು ರೀಸರ್ಚ್ ಆಫೀಸರ್ ಹುದ್ದೆಯನ್ನು ಸೃಜಿಸಲು ಅನುಮತಿಸಿರುವುದನ್ನು ಉಲ್ಲೇಖಿಸಿ ಸದರಿ ಹುದ್ದೆಯನ್ನು ನಿರ್ದೇಶಕರು, ಕಾರ್ಯಕ್ರಮ ಉಸ್ತುವಾರಿ ಹಾಗೂ ಅನುಷ್ಠಾನ ಎಂದು ಮರುಪದನಾಮೀಕರಿಸಲು ತಿಳಿಸಿದೆ. ಹಾಗೂ ICT Expert ಹುದ್ದೆಯನ್ನು ಹಾಗೂ ಇಬ್ಬರು ಡೇಟಾ ಎಂಟ್ರಿ ಆಪರೇಟರ್‌ಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆಯುವಂತೆ ಮತ್ತೊಮ್ಮೆ ತಿಳಿಸಿದೆ.

ಈ ಪ್ರಸ್ತಾವನೆಯ ಸಂಬಂಧ ಆರ್ಥಿಕ ಇಲಾಖೆಯು ಸಹಮತಿ ನೀಡಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 166 ಸಲುಸೇ 2014 ಬೆಂಗಳೂರು ದಿನಾಂಕ: 13-06-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶದ ಉಸ್ತುವಾರಿ ಮತ್ತು ಮೌಲ್ಯಮಾಪನ ವಿಭಾಗಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ನಿರ್ದೇಶಕರು | 01 |
| 2 | ರೀಸರ್ಚ್ ಆಫೀಸರ್ | 01 |
| | **ಒಟ್ಟು** | **02** |

ಇದರೊಂದಿಗೆ ICT Expert ಮತ್ತು 02 ಡಾಟಾ ಎಂಟ್ರಿ ಆಪರೇಟರ್ ಹುದ್ದೆಗಳ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೂಲಕ ನೇಮಿಸಿಕೊಳ್ಳುವುದು.

ಹೈದ್ರಾಬಾದ್–ಕರ್ನಾಟಕ ವಿಶೇಷ ಕೋಶದ ಆಡಳಿತ ಮತ್ತು ಸಮನ್ವಯ ವಿಭಾಗಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀನ ಕಾರ್ಯದರ್ಶಿ | 01 |
| 2 | ಶಾಖಾಧಿಕಾರಿ | 01 |
| | **ಒಟ್ಟು** | **02** |

ಇದರೊಂದಿಗೆ ಹೈದ್ರಾಬಾದ್–ಕರ್ನಾಟಕ ವಿಶೇಷ ಕೋಶದ ಉಸ್ತುವಾರಿ ಮತ್ತು ಮೌಲ್ಯಮಾಪನ ವಿಭಾಗದ ರೀಸರ್ಚ್ ಆಫೀಸರ್ ಹುದ್ದೆಯನ್ನು ನಿರ್ದೇಶಕರು, ಕಾರ್ಯಕ್ರಮ ಉಸ್ತುವಾರಿ ಹಾಗೂ ಅನುಷ್ಠಾನ ಎಂದು ಮರುಪದನಾಮೀಕರಿಸಿದೆ.

ಜಂಟಿ ನಿರ್ದೇಶಕರು ಹಾಗೂ ನಿರ್ದೇಶಕರು, ಕಾರ್ಯಕ್ರಮ ಉಸ್ತುವಾರಿ ಮತ್ತು ಅನುಷ್ಠಾನ, ಈ ಹುದ್ದೆಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ತತ್ಸಮಾನ ವೃಂದದ ಅಧಿಕಾರಿಗಳಿಂದ ನಿಯೋಜನೆ ಮೇಲೆ ಭರ್ತಿಮಾಡುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 727 ವೆಚ್ಚ–12/2013, ದಿನಾಂಕ:24.08.2013 ಹಾಗೂ ಟಿಪ್ಪಣಿ ಸಂಖ್ಯೆ:ಆಇ 265 ವೆಚ್ಚ–12/2014, ದಿನಾಂಕ:23.05.2014ರಲ್ಲಿ ನೀಡಿರುವ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಗೀತಾ ಎಲ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**PR. 548**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 279 ಎಸ್‌ಜಿಓ 85; ದಿನಾಂಕ:31–01–1986.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಅಸೇ 2013, ದಿನಾಂಕ:28–01–2013.
3. ಕಂದಾಯ ಇಲಾಖೆಯ ಕಡತ ಸಂಖ್ಯೆ: ಆರ್‌ಡಿ 3 ಎಸ್‌ಸಿಎ 2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಕಾಲಕಾಲಕ್ಕೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀನ ಕಾರ್ಯದರ್ಶಿ | 1 |
| 2 | ಹಿರಿಯ ಸಹಾಯಕ | 1 |
| 3 | ಸಹಾಯಕರು | 1 |
| 4 | ಕಿರಿಯ ಸಹಾಯಕ | 1 |
| 5 | ಬೆರಳಚ್ಚುಗಾರರು | 1 |
| 6 | ದಲಾಯತ್ | 1 |
| 7 | ವಾಹನ ಚಾಲಕ | 1 |
| | **ಒಟ್ಟು** | **07** |

ಕ್ರಮಸಂಖ್ಯೆ(2)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01.01.2013ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಮತ್ತೆ ದಿನಾಂಕ:01.01.2014 ರಿಂದ 31.12.2014ರವರೆಗೆ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 183 ಸಉಸೇ 2014 ಬೆಂಗಳೂರು ದಿನಾಂಕ: 30ನೇ ಜೂನ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01–01–2014 ರಿಂದ ದಿನಾಂಕ:31.12.2014ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀನ ಕಾರ್ಯದರ್ಶಿ | 1 |
| 2 | ಹಿರಿಯ ಸಹಾಯಕ | 1 |
| 3 | ಸಹಾಯಕರು | 1 |
| 4 | ಕಿರಿಯ ಸಹಾಯಕ | 1 |
| 5 | ಬೆರಳಚ್ಚುಗಾರರು | 1 |
| 6 | ದಲಾಯತ್ | 1 |
| 7 | ವಾಹನ ಚಾಲಕ | 1 |
| ಒಟ್ಟು | | 07 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-07-1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 549

**ಚಂದ್ರಶೇಖರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ವಿಧಾನಸಭೆ, ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಗಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸುವ ಕುರಿತು ಸಿ-ವೃಂದದ 300 ತಾತ್ಕಾಲಿಕ ಹೊಸ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 177 ಆಹಿಸೇ 2009, ದಿನಾಂಕ: 23-02-2010

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 235 ಶಿಸನೇ 2013, ದಿನಾಂಕ: 02-11-2013

3. ಸರ್ಕಾರಿ ಸೇರ್ಪಡೆ ಆದೇಶ ನಂ: ಸಿಆಸುಇ 233 ಶಿಸನೇ 2013 ದಿನಾಂಕ: 29-01-2014

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರ ಆದೇಶದಲ್ಲಿ ಮಾನ್ಯ ಶಾಸಕರುಗಳಿಗೆ ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಒಬ್ಬ ಆಪ್ತ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ವಿಧಾನಸಭೆ/ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸಲು ತೀರ್ಮಾನಿಸಿ ಅದರಂತೆ ಆದೇಶ ಹೊರಡಿಸಲಾಗಿದೆ. ಸದರಿ ಆದೇಶದಲ್ಲಿ ಈ ಹೆಚ್ಚುವರಿ ಆಪ್ತ ಸಹಾಯಕರ ಸೇವೆಯನ್ನು ಕಂದಾಯ, ಆರೋಗ್ಯ, ಶಿಕ್ಷಣ ಮತ್ತು ಪೋಲೀಸ್ ಇಲಾಖೆಗಳಲ್ಲಿರುವ ತಾಂತ್ರಿಕ ಸಿಬ್ಬಂದಿಗಳನ್ನು ಹೊರತುಪಡಿಸಿ 'ಸಿ'-ವೃಂದದ ಸಿಬ್ಬಂದಿಗಳನ್ನು ಮತ್ತು ಇನ್ನಿತರ ಇಲಾಖೆಗಳ 'ಸಿ'-ವೃಂದದ ಹುದ್ದೆಗಳಿಂದ ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ ಹಾಗೆಯೇ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಬಗ್ಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ಅರ್ಹ ನಿವೃತ್ತ ನೌಕರರು ಮತ್ತು ಅರ್ಹ ಖಾಸಗಿ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಸೇರ್ಪಡೆ ಆದೇಶದಲ್ಲಿ ಮಂಡಳಿ/ನಿಗಮ/ಸ್ಥಳೀಯ ಸಂಸ್ಥೆಗಳ/ ಸ್ವಾಯುತ್ತ ಸಂಸ್ಥೆಗಳ/ಶಾಸನಬದ್ಧ ಸಂಸ್ಥೆಗಳ ಸಿ-ವೃಂದದ ನೌಕರರನ್ನೂ ಸಹ ಹೆಚ್ಚವರಿ ಆಪ್ತ ಸಹಾಯಕರ ಹುದ್ದೆಗೆ ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ವಿಧಾನಸಭೆ ಮತ್ತು ವಿಧಾನಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಸರ್ಕಾರ ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಹೆಚ್ಚವರಿ ಆಪ್ತ ಸಹಾಯಕರುಗಳ 300 ತಾತ್ಕಾಲಿಕ ಹುದ್ದೆಗಳನ್ನು ಸೃಜನೆ ಮಾಡಲು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಶಿಸನೇ 2014, ಬೆಂಗಳೂರು. ದಿನಾಂಕ:28-05-2014**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಧಾನಸಭೆ ಮತ್ತು ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಈಗ ಇರುವ ಒಬ್ಬ ಆಪ್ತ ಸಹಾಯಕರ ಜೊತೆಗೆ ಹೆಚ್ಚುವರಿಯಾಗಿ ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಿಸಿಕೊಳ್ಳಲು 300 ಹುದ್ದೆಗಳನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು**

1) ಮಂಜೂರಾಗಿರುವ ಇಬ್ಬರು ಆಪ್ತ ಸಹಾಯಕರ ಪೈಕಿ ಕಡ್ಡಾಯವಾಗಿ ಒಬ್ಬ ಆಪ್ತ ಸಹಾಯಕರನ್ನು ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಅಥವಾ ಶಾಸನಬದ್ಧ ಸಂಸ್ಥೆಗಳಲ್ಲಿ ಸಕ್ರಮವಾಗಿ ನೇಮಕಾತಿ ಹೊಂದಿರುವ ನೌಕರರನ್ನು ನಿಯೋಜನೆ ಮೇಲೆ / ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳತಕ್ಕದ್ದು.

2) ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಸದಸ್ಯರು ಇಚ್ಛಿಸಿದಲ್ಲಿ ಅರ್ಹರಾದ ಖಾಸಗಿ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಬಹುದು.

3) ಒಂದು ವೇಳೆ ಮಾನ್ಯ ಸದಸ್ಯರು ಈಗಾಗಲೇ ಇಬ್ಬರೂ ಖಾಸಗಿ ವ್ಯಕ್ತಿಗಳನ್ನು ಆಪ್ತ ಸಹಾಯಕರನ್ನಾಗಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಂಡಿದ್ದಲ್ಲಿ ಅವರುಗಳ ಪೈಕಿ ಮಾನ್ಯ ಸದಸ್ಯರು ಸೂಚಿಸುವ ಒಬ್ಬರ ಸೇವೆಯನ್ನು ಕೂಡಲೇ ರದ್ದುಗೊಳಿಸಿ ಅವರು ಸಲ್ಲಿಸಿದ ಸೇವಾ ಅವಧಿಗೆ ವೇತನ ಮತ್ತು ಭತ್ಯೆಗಳನ್ನು ನೀಡಿ ಅವರನ್ನು ಬಿಡುಗಡೆ ಗೊಳಿಸತಕ್ಕದ್ದು.

4) ಈ ಹೆಚ್ಚುವರಿ ಆಪ್ತ ಸಹಾಯಕರುಗಳಿಗೆ ವೇತನ ಮತ್ತು ಭತ್ಯೆಗಳನ್ನು ಪಾವತಿಸಲು ಸಿಆಸುಇ ಲೆಕ್ಕಪತ್ರ–1 ವಿಭಾಗ ಕ್ರಮವಹಿಸುವುದು.

5) ಈ 300 ಹುದ್ದೆಗಳ ತಾತ್ಕಾಲಿಕ ಸೃಜನೆಯ ಸಂಬಂಧ ಕರ್ನಾಟಕ ಸರ್ಕಾರ ಸಚಿವಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲು ಕ್ರಮ ವಹಿಸಿತಕ್ಕದ್ದು.

ಈ ಹೆಚ್ಚುವರಿ ಆಪ್ತ ಸಹಾಯಕ ಹುದ್ದೆಗಳಿಗೆ ಸರ್ಕಾರದ ಇಲಾಖೆಗಳಿಂದ ನಿಯೋಜನೆ ಮೇಲೆ ಹಾಗೂ ನಿಗಮ ಮಂಡಳಿಗಳು / ಸರ್ಕಾರದ ಸ್ವಾಯತ್ತ ಸಂಸ್ಥೆಗಳಿಂದ ನೇಮಕಾತಿ ಹೊಂದಿದ ನೌಕರರ ವೇತನವನ್ನು ಪಾವತಿಸಲು ತಗಲುವ ವೆಚ್ಚವನ್ನು ಕರ್ನಾಟಕ ಸರ್ಕಾರ ಸಚಿವಾಲಯಕ್ಕೆ ಒದಗಿಸಿರುವ ಈ ಕೆಳಕಂಡ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

2052–00–090–0–01

3451–00–090–1–01

2251–00–090–0–01

ಮೇಲ್ಕಂಡ ಆಪ್ತ ಸಹಾಯಕ ಹುದ್ದೆಗಳಿಗೆ ಖಾಸಗಿ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿದ ನೌಕರರ ವೇತನವನ್ನು ಪಾವತಿಸಲು ತಗಲುವ ವೆಚ್ಚವನ್ನು ಕರ್ನಾಟಕ ಸರ್ಕಾರ ಸಚಿವಾಲಯಕ್ಕೆ ಒದಗಿಸಿರುವ ಈ ಕೆಳಕಂಡ ಉಪ ಲೆಕ್ಕ ಶಿರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

2052–00–090–0–01–001 (Consolidated Salary)

3451–00–090–0–01–001 (Consolidated Salary)

2251–00–090–0–01–001 (Consolidated Salary)

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/445/ವೆಚ್ಚ–12/2014 ದಿನಾಂಕ:19–05–2014ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ)

**PR. 550**
**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಪೂರಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 1994; ದಿನಾಂಕ:07–07–1994.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 1999; ದಿನಾಂಕ:22–10–1999.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 09 ಸಸಿವಿ 2007; ದಿನಾಂಕ:02–03–2007.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 233 ಸಅಸೇ 2009; ದಿನಾಂಕ:15–05–2009.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 197 ಸಅಸೇ 2009; ದಿನಾಂಕ:22–04–2010.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 204 ಸಅಸೇ 2011; ದಿನಾಂಕ:15–04–2011.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 291 ಸಅಸೇ 2012; ದಿನಾಂಕ:04–06–2012.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 326 ಸಅಸೇ 2013;ದಿನಾಂಕ:07–08–2013
9. ಜಲ ಸಂಪನ್ಮೂಲ ಇಲಾಖೆಯ ಕೃ.ಭಾ.ಜ.ನಿ. ವಿಶೇಷ ಕೋಶ, ಇವರ ಕಡತ ಸಂಖ್ಯೆ ಜಸಂಇ 126 ಕೆಬಿಎನ್ 2014.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1) ಮತ್ತು (2) ರ ಸರ್ಕಾರದ ಆದೇಶಗಳಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಸೃಜಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3) ರಿಂದ (8) ರವರೆಗಿನ ಸರ್ಕಾರಿ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಕಡತದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶದಲ್ಲಿ ನಿಗಮದ ವ್ಯಾಪ್ತಿಗೆ ಒಳಪಡುವ ಕೃಷ್ಣಾ ಮೇಲ್ದಂಡೆ ಯೋಜನೆಗೆ ಸಂಬಂಧಿಸಿದ ಸಂಪೂರ್ಣ ಕಾರ್ಯನಿರ್ವಹಣೆಗಾಗಿ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳನ್ನು ಮುಂದುವರಿಸುವ ಅಗತ್ಯವಿದೆ ಎಂದು ಜಲಸಂಪನ್ಮೂಲ ಇಲಾಖೆಯ ಕಡತ ಸಂಖ್ಯೆ:126 ಕೆ.ಬಿ.ಎನ್.2014ರಲ್ಲಿ ಕೋರಿರುತ್ತಾರೆ. ಸದರಿ ಕಡತದಲ್ಲಿ ಕೋರಿರುವಂತೆ ಜಲಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳನ್ನು ದಿನಾಂಕ:01–04–2014 ರಿಂದ 31.03.2015ರವರೆಗೆ ಮುಂದುವರೆಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕರು | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರ | 1 |
| 7 | ಬೆರಳಚ್ಚುಗಾರ | 1 |
| 8 | ದಲಾಯತ್ | 1 |

**ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 |
| 2 | ಕಿರಿಯ ಸಹಾಯಕ | 1 |
| 3 | ಗ್ರೂಪ್–ಡಿ | 1 |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 173 ಸಲುಸೇ 2014, ಬೆಂಗಳೂರು, ದಿನಾಂಕ:01ನೇ ಜುಲೈ, 2014**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2014 ರಿಂದ 31.3.2015 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕರು | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರ | 1 |
| 7 | ಬೆರಳಚ್ಚುಗಾರ | 1 |
| 8 | ದಲಾಯತ್ | 1 |

**ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 |
| 2 | ಕಿರಿಯ ಸಹಾಯಕ | 1 |
| 3 | ಗ್ರೂಪ್–ಡಿ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ:10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 551**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಶಾಖಾಧಿಕಾರಿ (ಕಾನೂನು ಕೋಶ) ಹುದ್ದೆಯನ್ನು ವಿಶೇಷಾಧಿಕಾರಿ(ಕಾನೂನು ಕೋಶ) ಹುದ್ದೆಯನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:RCK5/SES/2007-08 ದಿನಾಂಕ: 09–04–2014.

**ಪ್ರಸ್ತಾವನೆ:–**

ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರು ತಮ್ಮ ಕಛೇರಿಯಲ್ಲಿ ಕಾನೂನು ಕೋಶದ ಶಾಖಾಧಿಕಾರಿ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಡಾ॥ ಸುಮತಿ ಎಸ್, ಸಹಕಾರ ಸಂಘಗಳ ಲೆಕ್ಕ ಪರಿಶೋಧನೆ ಇಲಾಖೆಯ, ಸಹಾಯಕ ನಿರ್ದೇಶಕರು ವೃಂದದ ಅಧಿಕಾರಿ, ಇವರಿಗೆ ಉಪ ನಿರ್ದೇಶಕರ (ವೇತನ ಶ್ರೇಣಿ: ರೂ.36,300–53,850) ಹುದ್ದೆಗೆ ಮುಂಬಡ್ತಿ ದೊರೆಯುತ್ತಿದ್ದು ಇವರ ಸೇವೆ ಅಗತ್ಯವಿರುವುದರಿಂದ ಹಾಗೂ ನಿಯೋಜನೆಯಲ್ಲಿ ಮುಂದುವರೆಯಲು ಅಧಿಕಾರಿಯು ಇಚ್ಛಿಸಿರುವುದರಿಂದ ಅವರ ಮುಂಬಡ್ತಿ ನಂತರ ತಮ್ಮ ಕಛೇರಿಯಲ್ಲಿ 3 ವರ್ಷಗಳಿಂದ ಖಾಲಿ ಇರುವ ಅಧೀನ ಕಾರ್ಯದರ್ಶಿ (ವ್ಯಾಜ್ಯ) ಹುದ್ದೆಗೆ ಅಥವಾ ಹಾಲಿ ಅವರು ಕಾರ್ಯ ನಿರ್ವಹಿಸುತ್ತಿರುವ ಶಾಖಾಧಿಕಾರಿ(ಕಾನೂನು ಕೋಶ) ಹುದ್ದೆಯನ್ನು ಸಹಕಾರ ಸಂಘಗಳ ಲೆಕ್ಕ ಪರಿಶೋಧನೆ ಇಲಾಖೆಯ, ಉಪ ನಿರ್ದೇಶಕರ ರೂ.36,300–53,850 ವೇತನ ಶ್ರೇಣಿಗೆ ತತ್ಸಮಾನವಾದ ಹುದ್ದೆಗೆ ಉನ್ನತೀಕರಿಸಿ ಅವರನ್ನು ನೇಮಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಭವನದಲ್ಲಿ ಮಂಜೂರಾಗಿರುವ Assistant Solicitor and Ex-officio Under Secretary (Litigation) ಹುದ್ದೆಗೆ ನ್ಯಾಯಾಂಗ ಸೇವಾ ಅಧಿಕಾರಿಯನ್ನು ನಿಯೋಜನೆ ಮೇಲೆ ನೇಮಿಸಬೇಕಾಗಿರುತ್ತದೆ. ಸದರಿ ಹುದ್ದೆಗೆ ಇತರೆ ಸೇವೆಯ ಅಧಿಕಾರಿಗಳನ್ನು ನೇಮಿಸಲು ಅವಕಾಶವಿರುವುದಿಲ್ಲ. ಸಚಿವಾಲಯದ ಅಧೀನ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿ ರೂ.28,100–50,100 ಆಗಿದ್ದು, ಡಾ॥ ಸುಮತಿ ಎಸ್, ಇವರು ಮುಂಬಡ್ತಿ ಹೊಂದಲಿರುವ ಉಪ ನಿರ್ದೇಶಕರ ವೇತನ ಶ್ರೇಣಿ ರೂ. 36,300–53,850 ಆಗಿದೆ ಹಾಗೂ ಸಚಿವಾಲಯದ ಉಪ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿ ರೂ. 40,050–56,550 ಆಗಿರುತ್ತದೆ. ಈ ಕಾರಣಗಳಿಂದ ಕರ್ನಾಟಕ ಭವನದ ಶಾಖಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ಹುದ್ದೆಯನ್ನಾಗಿ ಉನ್ನತೀಕರಿಸಿ ಅವರನ್ನು ಮುಂದುವರಿಸಲು ಸಾಧ್ಯವಿರುವುದಿಲ್ಲ.

ನಿವಾಸಿ ಆಯುಕ್ತರು, ಕರ್ನಾಟಕ ಭವನ ಇವರು ನೀಡಿರುವ ಸಮರ್ಥನೆಯ ಹಿನ್ನೆಲೆಯಲ್ಲಿ ಡಾ॥ ಸುಮತಿ ಎಸ್, ಇವರ ನಿಯೋಜನಾ ಸೇವೆಯನ್ನು ಮುಂದುವರೆಸುವುದು ಅಗತ್ಯವಿದ್ದರೂ ಅನಿರ್ದಿಷ್ಟ ಅವಧಿಯವರೆಗೆ ಹುದ್ದೆಯನ್ನು ಉನ್ನತೀಕರಿಸುವುದು ಸೂಕ್ತವಲ್ಲವಾದ್ದರಿಂದ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಭವನದ ಶಾಖಾಧಿಕಾರಿ ಹುದ್ದೆಯನ್ನು ರೂ. 36.300–53850 ವೇತನ ಶ್ರೇಣಿಯ ವಿಶೇಷಾಧಿಕಾರಿ (ಕಾನೂನು ಕೋಶ) ಹುದ್ದೆಯನ್ನಾಗಿ ಉನ್ನತೀಕರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 144 ಸಲುಸೇ 2014 ಬೆಂಗಳೂರು, ದಿನಾಂಕ:02ನೇ ಜುಲೈ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭವನ, ನವದೆಹಲಿ, ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಶಾಖಾಧಿಕಾರಿ (ಕಾನೂನು ಕೋಶ), ಹುದ್ದೆಯನ್ನು ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ.36,300–53,850 ವೇತನ ಶ್ರೇಣಿಯ ವಿಶೇಷಾಧಿಕಾರಿ (ಕಾನೂನು ಕೋಶ) ಹುದ್ದೆಯನ್ನಾಗಿ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 461 ಸೇ–3/14 ದಿನಾಂಕ:25–06–2014 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಗೀತಾ ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**P.R: 552**

## ಶಿಕ್ಷಣ ಸಚಿವಾಲಯ

**ವಿಷಯ** : ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪಾಲಿಟೆಕ್ನಿಕ್‌ಗಳ ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01–04–2011ರಿಂದ 31.03.2015ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ. ಇವರ ಪತ್ರಸಂಖ್ಯೆ: ಡಿಟಿಇ/95/ಇಎಸ್‌ಟಿ (2)ಬಿ/2008/11719, ದಿನಾಂಕ:27–12–2012.
2. ಸಮಸಂಖ್ಯೆಯ ಸರ್ಕಾರಿ ಪತ್ರ. ದಿನಾಂಕ: 17–05–2013 ಮತ್ತು 27.09.2013.
3. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರ ಪತ್ರಸಂಖ್ಯೆ: ಡಿಟಿಇ/95/ಇಎಸ್‌ಟಿ (2)ಬಿ/2008/2950, ದಿನಾಂಕ:14–11–2013 ಮತ್ತು 1822/12.08.2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರು ಸರ್ಕಾರಿ ಪತ್ರ ಸಂಖ್ಯೆ: ಇಡಿ 69 ಟಿಪಿಇ 2009, ದಿನಾಂಕ: 08–03–2011ರಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿನ ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01–04–2009ರಿಂದ 31.03.2011ರವರೆಗೆ ಮುಂದುವರೆಸಿ. ಆದೇಶ ಹೊರಡಿಸಲಾಗಿದ್ದು, ಪ್ರಸ್ತುತ ಸದರಿ ಹುದ್ದೆಗಳ ಅವಶ್ಯಕತೆಯಿರುವುದರಿಂದ ದಿನಾಂಕ:01–04–2011ರಿಂದ ಮುಂದುವರೆಸುವಂತೆ ಪ್ರಸ್ತಾವನೆ ಸಲ್ಲಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸರ್ಕಾರಿ ಪತ್ರಗಳಲ್ಲಿ ಪ್ರಸ್ತಾಪಿತ ಅರೆಕಾಲಿಕ ಉಪನ್ಯಾಸಕರನ್ನು ಯಾವ ಅವಧಿಯಿಂದ ಯಾವ ಅವಧಿಯವರೆಗೆ ಮುಂದುವರೆಸಬೇಕು, ಸದರಿ ಪ್ರಸ್ತಾವನೆಗೆ ತಗಲುವ ಆರ್ಥಿಕ ಹೊರೆಯ ಬಗ್ಗೆ ಮಾಹಿತಿಯನ್ನು ಒದಗಿಸುವಂತೆ ಮತ್ತು ಈ ಹಿಂದೆ 02 ವರ್ಷಗಳ ಅವಧಿಗೆ ಸದರಿ ಅರೆಕಾಲಿಕ ನೌಕರರುಗಳನ್ನು ಮುಂದುವರೆಸಿದ್ದ ಅವಧಿಯು ದಿನಾಂಕ: 31.03.2011ಕ್ಕೆ ಮುಗಿದಿದ್ದು. ಈಗ 02 ವರ್ಷಗಳ ನಂತರ ಪ್ರಸ್ತಾವನೆಯನ್ನು ಸಲ್ಲಿಸುತ್ತಿರುವುದರ ಬಗ್ಗೆ ವಿವರಣೆಗಳೊಂದಿಗೆ ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿತ್ತು.

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರು ಅರೆಕಾಲಿಕ/ತಾತ್ಕಾಲಿಕ ನೌಕರರುಗಳ ಸೇವೆಯನ್ನು ಮುಂದುವರೆಸುವ ಬಗ್ಗೆ ಮತ್ತು ಖಾಲಿಯಿರುವ ಪೂರ್ಣಾವಧಿ ಹುದ್ದೆಗಳು ಮತ್ತು ಮಂಜೂರಾದ ಹುದ್ದೆಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಪಾಲಿಟೆಕ್ನಿಕ್‌ಗಳಿಂದ ಮಾಹಿತಿಯನ್ನು ಪಡೆಯಲು ಪತ್ರವ್ಯವಹಾರ ನಡೆಸುತ್ತಿದ್ದು. ಸದರಿಯವರುಗಳಿಂದ ವಿವರವಾದ ಮಾಹಿತಿಯನ್ನು ಪಡೆಯಲು ಸಮಯಾವಕಾಶದ ಅವಶ್ಯಕತೆಯಿದ್ದುದರಿಂದ

ಮತ್ತು ಸದರಿಯವರುಗಳಿಂದ ಈ ಬಗ್ಗೆ ಮಾಹಿತಿಯನ್ನು ಪಡೆದು 128 ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳಲ್ಲಿ 31 ಬೋಧಕ ಮತ್ತು 2 ಬೋಧಕೇತರ ಹುದ್ದೆಗಳನ್ನು ರದ್ದುಪಡಿಸಲು ಮತ್ತು ಉಳಿದ 95 ಬೋಧಕ/ಬೋಧಕೇತರ ಹುದ್ದೆಗಳನ್ನು ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಕನಿಷ್ಠ 05 ವರ್ಷಗಳ ಅವಧಿಗೆ ಮುಂದುವರೆಸಿ ಆದೇಶ ಹೊರಡಿಸಬೇಕೆಂದು ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ:14–11–2013ರ ಪತ್ರದಲ್ಲಿ ಕೋರಲಾಗಿದೆ. ಮುಂದುವರೆದು ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ: 12–08–2013ರ ಪತ್ರದಲ್ಲಿ ಮಂಜೂರಾಗಿರುವ 128 ಅರೆಕಾಲಿಕ/ತಾತ್ಕಾಲಿಕ ನೌಕರರುಗಳಿಗೆ ತಗಲುವ ವಾರ್ಷಿಕ ಅಂದಾಜು ವೆಚ್ಚ ಉಪನ್ಯಾಸಕರುಗಳ ಹುದ್ದೆಗಳಿಗೆ ರೂ. 66,25,000–00 ಮತ್ತು ಇತರ ಸಿಬ್ಬಂದಿಗಳಿಗೆ ರೂ.1,16,600–00 ಸೇರಿದಂತೆ ಒಟ್ಟು ರೂ.67,41,600–00ಗಳಾಗಲಿದ್ದು, ಆ ಹುದ್ದೆಗಳಲ್ಲಿ ಅವಶ್ಯಕತೆಯಿಲ್ಲದಿರುವ 31 ಬೋಧಕ ಮತ್ತು 2 ಬೋಧಕೇತರ ಹುದ್ದೆಗಳನ್ನು ರದ್ದುಪಡಿಸಿದಲ್ಲಿ ಉಪನ್ಯಾಸಕರುಗಳ ಹುದ್ದೆಗೆ ರೂ.42,50,000–00 ಮತ್ತು ಇತರ ಸಿಬ್ಬಂದಿಗಳಿಗೆ ರೂ.1,11,600–00ಗಳು ಸೇರಿ ಒಟ್ಟು ರೂ.43,61,600–00 ಗಳಾಗಿದ್ದು, ಸದರಿ ವೆಚ್ಚವನ್ನು ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಭರಿಸುವುದು ಅಗತ್ಯವಾಗಿದ್ದು, ಈಗಾಗಲೇ 02 ವರ್ಷಗಳ ಕಾಲ ಕಾರ್ಯನಿರ್ವಹಿಸಿರುವ ಅರೆಕಾಲಿಕ/ತಾತ್ಕಾಲಿಕ ಉಪನ್ಯಾಸಕರುಗಳಿಗೆ ಅರೆಕಾಲಿಕ ಭತ್ಯೆಯನ್ನು ಪಾವತಿಸಬೇಕಾಗಿರುವುದರಿಂದ ಸದರಿ ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳನ್ನು 05 ವರ್ಷಗಳ ಅವಧಿಗೆ ಮುಂದುವರೆಸಿ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಇಡಿ 113 ಟಿಪಿಇ 2013, ಬೆಂಗಳೂರು, ದಿನಾಂಕ:23ನೇ ಜೂನ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪಾಲಿಟೆಕ್ನಿಕ್‌ಗಳ ಅನುಬಂಧದಲ್ಲಿ ಸೂಚಿಸಿರುವ 95 ಅರೆಕಾಲಿಕ/ತಾತ್ಕಾಲಿಕ ಬೋಧಕ/ಬೋಧಕೇತರ ಹುದ್ದೆಗಳನ್ನು ದಿನಾಂಕ: 01.04.2011ರಿಂದ 31.03.2015ರವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿಸಂಖ್ಯೆ: ಆಇ 556 ವೆಚ್ಚ–8 ದಿನಾಂಕ: 06–06–2014ರಂದು ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ನಾಗಭೂಷಣ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 113 ಟಿಪಿಇ 2013, ದಿನಾಂಕ: 23–06–2014ಕ್ಕೆ**

**ಅನುಬಂಧ**

| ಕ್ರಮ ಸಂಖ್ಯೆ | ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯ ಹೆಸರು | ವಿಭಾಗ | ಮಂಜೂರಾಗಿರುವ ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳ ಸಂಖ್ಯೆ |
|---|---|---|---|
| 1 | ಡಿ.ಆರ್.ಆರ್.ಸರ್ಕಾರಿ ಪಾಲಿಟೆಕ್ನಿಕ್, ದಾವಣಗೆರೆ | ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು | 01 |
| 2 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಮಂಗಳೂರು. | ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು | 01 |
| | | ವಿದ್ಯುತ್ ಉಪನ್ಯಾಸಕರು | 01 |
| 3 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು. | ವಿಜ್ಞಾನ & ಗಣಿತ ಉಪನ್ಯಾಸಕರು | 01 |
| | | ವಿದ್ಯುತ್‌ಉಪನ್ಯಾಸಕರು | 01 |
| | | ಟೆಕ್ಸಟೈಲ್ ಉಪನ್ಯಾಸಕರು | 01 |
| | | ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು | 01 |
| | | ಇಂಡಿಯನ್ ಅಡ್ಮಿನಿಸ್ಟ್ರೇಷನ್ ಉಪನ್ಯಾಸಕರು | 01 |
| | | ಕನ್ನಡ ಉಪನ್ಯಾಸಕರು | 01 |
| 4 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹುಬ್ಬಳ್ಳಿ. | ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು | 01 |
| | | ಕಂಪ್ಯೂಟರ್ ಸೈನ್ಸ್ (ಡಿಸಿಪಿ). ಕನ್ನಡ ಉಪನ್ಯಾಸಕರು | 01 |
| | | ಕಂಪ್ಯೂಟರ್ ಸೈನ್ಸ್ (ಡಿಸಿಪಿ).ಇಂಗ್ಲೀಷ್ ಉಪನ್ಯಾಸಕರು | 01 |
| | | ಅಂಕಗಣಿತ & ಸಂಖ್ಯಾಶಾಸ್ತ್ರ ಉಪನ್ಯಾಸಕರು | 01 |
| | | ಟೆಕ್ಸ್‌ಟೈಲ್ (ಎಡಿಎಫ್‌ಟಿ) ಉಪನ್ಯಾಸಕರು | 01 |
| 5 | ಎಸ್.ಜೆ.ಸರ್ಕಾರಿ ಪಾಲಿಟೆಕ್ನಿಕ್, (ಸಂಜೆ), ಬೆಂಗಳೂರು. | ಮೆಕ್ಯಾನಿಕಲ್ ವಿಭಾಗ ಮುಖ್ಯಸ್ಥರು | 01 |
| | | ವಿದ್ಯುತ್ ವಿಭಾಗ ಮುಖ್ಯಸ್ಥರು | 01 |
| | | ವಿಜ್ಞಾನ ವಿಭಾಗ ಮುಖ್ಯಸ್ಥರು | 01 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರಮ ಸಂಖ್ಯೆ | ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯ ಹೆಸರು | ವಿಭಾಗ | ಮಂಜೂರಾಗಿರುವ ಅರೆಕಾಲಿಕ/ತಾತ್ಕಾಲಿಕ ಹುದ್ದೆಗಳ ಸಂಖ್ಯೆ |
|---|---|---|---|
| | | ಟೆಲಿಕಮ್ಯುನಿಕೇಷನ್ಸ್ ವಿಭಾಗ ಮುಖ್ಯಸ್ಥರು | 01 |
| | | ಟೆಲಿಕಮ್ಯುನಿಕೇಷನ್ಸ್ ಉಪನ್ಯಾಸಕರು | 03 |
| | | ಮೆಕ್ಯಾನಿಕಲ್ ಉಪನ್ಯಾಸಕರು | 01 |
| | | ಮೆಕ್ಯಾನಿಕಲ್ (ಶಿಕ್ಷಕರು) | 01 |
| | | ಮೆಕ್ಯಾನಿಕಲ್ (ಸಹಾಯಕಶಿಕ್ಷಕರು) | 06 |
| | | ಮೆಕ್ಯಾನಿಕಲ್ (ಮೆಕ್ಯಾನಿಕ್ಸ್) | 07 |
| | | ಮೆಕ್ಯಾನಿಕಲ್ (ಹೆಲ್ಪರ್ಸ್) | 02 |
| | | ವಿದ್ಯುತ್ ಉಪನ್ಯಾಸಕರು | 02 |
| | | ವಿದ್ಯುತ್ ವಿಭಾಗ (ಮೆಕ್ಯಾನಿಕ್ಸ್) | 02 |
| | | ವಿದ್ಯುತ್ ವಿಭಾಗ (ಹೆಲ್ಪರ್ಸ್) | 02 |
| | | ಟೆಲಿಕಮ್ಯುನಿಕೇಷನ್ಸ್ (ಮೆಕ್ಯಾನಿಕ್ಸ್) | 04 |
| | | ಟೆಲಿಕಮ್ಯುನಿಕೇಷನ್ಸ್ (ಹೆಲ್ಪರ್ಸ್) | 02 |
| | | ವಿಜ್ಞಾನ & ಗಣಿತ ಉಪನ್ಯಾಸಕರು | 03 |
| | | ಇಂಗ್ಲೀಷ್ ಉಪನ್ಯಾಸಕರು | 01 |
| 6 | ಸರ್ಕಾರಿ ಎಸ್.ಕೆ.ಎಸ್.ಜೆ.ಟಿ, ಬೆಂಗಳೂರು. | ಗಣಿತ & ಭೌತಶಾಸ್ತ್ರ ಉಪನ್ಯಾಸಕರು | 02 |
| | | ಗಣಿತ & ಭೌತಶಾಸ್ತ್ರ ಡೆಮಾನ್‌ಸ್ಟ್ರೇಟರ್ಸ್ | 02 |
| | | ಜನರಲ್ ಎಜುಕೇಷನ್ ಉಪನ್ಯಾಸಕರು | 01 |
| | | ಗಣಿತ ಉಪನ್ಯಾಸಕರು | 01 |
| | | ಭೌತಶಾಸ್ತ್ರ ಉಪನ್ಯಾಸಕರು | 03 |
| | | ರಸಾಯನಶಾಸ್ತ್ರ ಉಪನ್ಯಾಸಕರು | 03 |
| | | ಮೆಕ್ಯಾನಿಕಲ್ ಉಪನ್ಯಾಸಕರು | 03 |
| | | ವಿದ್ಯುತ್ ಉಪನ್ಯಾಸಕರು | 03 |
| 6 | ಸರ್ಕಾರಿ ಎಸ್.ಕೆ.ಎಸ್.ಜೆ.ಟಿ, ಬೆಂಗಳೂರು. | ಇಂಜಿನಿಯರಿಂಗ್ ಡ್ರಾಯಿಂಗ್ ಉಪನ್ಯಾಸಕರು | 01 |
| | | ವರ್ಕ್‌ಶಾಪ್ ಪ್ರಾಕ್ಟೀಸ್ ಶಿಕ್ಷಕರು | 02 |
| | | ವಿದ್ಯುತ್ ವಿಭಾಗದ ಶಿಕ್ಷಕರು | 02 |
| | | ಸ್ಟೋರ್ಸ್‌ಕೀಪರ್ಸ್ | 02 |
| | | ಅಟೆಂಡರ್ಸ್ | 08 |
| | | ಬೇಸಿಕ್ ಎಲೆಕ್ಟ್ರಾನಿಕ್ಸ್ & ಅಪ್ಲಿಕೇಷನ್ಸ್ ಉಪನ್ಯಾಸಕರು | 01 |
| | | ಮೆಟೀರಿಯಲ್ ಸೈನ್ಸ್ ಉಪನ್ಯಾಸಕರು | 01 |
| | | ಟೆಕ್ಸ್‌ಟೈಲ್ ಮೆಷಿನ್ ಡ್ರಾಯಿಂಗ್ ಉಪನ್ಯಾಸಕರು | 01 |
| | | ಫ್ಲೂಯಿಡ್ ಮೆಕ್ಯಾನಿಕ್ಸ್ ಉಪನ್ಯಾಸಕರು | 01 |
| | | ಸ್ಟ್ರೆಂಥ್ ಆಫ್ ಮೆಟೀರಿಯಲ್ ಉಪನ್ಯಾಸಕರು | 01 |
| | | ಇಂಗ್ಲೀಷ್ ಉಪನ್ಯಾಸಕರು | 01 |
| 7 | ಎಸ್.ಜೆ.ಸರ್ಕಾರಿ ಪಾಲಿಟೆಕ್ನಿಕ್, ಬೆಂಗಳೂರು. | ಜಿಯಾಲಜಿ (ಸೆರಾಮಿಕ್ಸ್) ಉಪನ್ಯಾಸಕರು | 01 |
| 8 | ಕರ್ನಾಟಕ ಸರ್ಕಾರಿ ಪಾಲಿಟೆಕ್ನಿಕ್, ಮಂಗಳೂರು | ಪ್ಲಾಟ್ ಮೇಂಟಿನೆನ್ಸ್ ಸೇಫ್ಟಿ & ವ್ಯಾಲ್ಯೂಯೇಷನ್ ಕಂಟ್ರೋಲ್–1 ವಿಭಾಗದ ಉಪನ್ಯಾಸಕರು | 01 |

**ಸೂಚನೆ:** ಮೇಲ್ಕಂಡ ಎಲ್ಲಾ ಹುದ್ದೆಗಳಿಗೆ ಕಾಲಕಾಲಕ್ಕೆ ಹೊರಡಿಸಿದ ಸರ್ಕಾರಿ ಆದೇಶಗಳಲ್ಲಿ ಮಂಜೂರು ಮಾಡಿರುವ ವೇತನವನ್ನು ಮಂಜೂರು ಮಾಡುವುದು.

**ಬಿ. ನಾಗಭೂಷಣ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**P.R: 553**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59